ಕೆ. ವಸಂತಲಕ್ಷ್ಮಿ

# ಶ್ರವಣಬೆಳಗೊಳದ ಶಿವಮಾರನ ಬಸದಿ

ಕರ್ನಾಟಕದ ಪ್ರಾಚೀನ ಜೈನಕೇಂದ್ರಗಳಲ್ಲಿ ಶ್ರವಣಬೆಳಗೊಳವೂ ಒಂದಾಗಿದೆ. ಇಲ್ಲಿಯ ಚಂದ್ರಗಿರಿಯು ವೈವಿಧ್ಯಮಯ ಶಾಸನಗಳನ್ನು ಹೊಂದಿರುವಂತೆ, ಪ್ರಾಚೀನ ರಾಜವಂಶಗಳ ಧಾರ್ಮಿಕ ಸಂಬಂಧವನ್ನೂ ಹೊಂದಿದೆ. ಉತ್ತರದಿಂದ ಬಂದ ಭದ್ರಬಾಹು ಭಟಾರಕರು ತಪಗೆಯ್ದಿದ್ದು ಇಲ್ಲಿಯೇ. ಅನೇಕ ಜೈನಮುನಿಗಳು ಈ ಕ್ಷೇತ್ರದಲ್ಲಿ ಸಂನ್ಯಸನದಿಂದ ಮುಡಿಪಿದ್ದಾರೆ. ಹೀಗಿದ್ದರೂ ಇಂದು ಸ್ಪಷ್ಟವಾಗಿ ಗುರುತಿಸಬಲ್ಲ ಪ್ರಾಚೀನ ಅವಶೇಷಗಳು ಇಲ್ಲಿ ಕಡಿಮೆ ಎಂದೇ ಹೇಳಬೇಕಾಗಿದೆ.

ಇಂತಹ ಅವಶೇಷಗಳಲ್ಲಿ ಪೂರ್ಣವಾಗಿ ಉಳಿದಿರುವ ಚಂದ್ರಗುಪ್ತ ಬಸದಿ, ಚಾವುಂಡರಾಯ ಬಸದಿಗಳು ಮುಖ್ಯವಾದರೂ, ಇನ್ನೂ ಇತರ ವಾಸ್ತು ಅವಶೇಷಗಳು ಉಳಿದಿರಬಹುದೆಂಬ ಶಂಕೆ ಮೂಡುತ್ತದೆ. 'ಚಾವುಂಡರಾಯಂ ಮಾಡಿಸಿದಂ'[1] ಎಂಬ ಬರಹವುಳ್ಳ ಚಾವುಂಡರಾಯನ ಬಸದಿಯು ಇಂದಿಗೂ ಸುಸ್ಥಿತಿಯಲ್ಲಿದೆ. ಆದರೆ ಇದರ ಬಳಿಯೇ ಇರುವ ಪ್ರಾಚೀನ ಬಸದಿಯಾದ ಚಂದ್ರಪ್ರಭ ಬಸದಿಯು ಮೂಲರೂಪದಲ್ಲಿ ಕಾಣದೇ ಕಾಲಕಾಲದಲ್ಲಿ ಬದಲಾವಣೆಗೆ ಒಳಗಾಗಿದೆ. ಇಲ್ಲಿ ದೊರೆಯುವ 'ಸಿವಮಾರನ ಬಸದಿ'[2] ಎಂಬ ಬರಹದ ಆಧಾರದ ಮೇಲೆ ವಿದ್ವಾಂಸರು ಇದನ್ನು ಗಂಗರ ಅರಸ ಎರಡನೇ ಶಿವಮಾರನು ಕಟ್ಟಿಸಿರಬಹುದಾದ ಬಸದಿಯೆಂದು ಗುರುತಿಸುತ್ತಾರೆ.

ಈ ಬಸದಿಯು ಗರ್ಭಗೃಹ, ನವರಂಗಗಳನ್ನೊಳಗೊಂಡಿದ್ದು, ಸರಳ ಅಧಿಷ್ಠಾನದ ಮೇಲೆ ಇಟ್ಟಿಗೆಯ ಗೋಡೆಯನ್ನು ಹೊಂದಿದೆ. ಕಾಲದ ಒತ್ತಡಕ್ಕೆ ಸಿಕ್ಕಿ ಶಿಥಿಲವಾಗಿದ್ದಿರಬಹುದಾದ ಶಿಲಾಭಿತ್ತಿಯ ಜಾಗದಲ್ಲಿ ಇಟ್ಟಿಗೆಯ ಭಿತ್ತಿ ಬಂದಿದೆ. ಸುಮಾರು ಎಂಟು – ಒಂಬತ್ತನೇ ಶತಮಾನದ್ದೆಂದು ಗುರುತಿಸಬಹುದಾದ ಕಂಬಗಳು ಕೆಲವು ಬದಲಾಗಿರುವಂತೆ ತೋರುತ್ತದೆ. ಇದರಿಂದ ಕಾಲಾಂತರದಲ್ಲಿ ಈ ಬಸದಿಯು ಜೀರ್ಣೋದ್ಧಾರವಾಗಿದೆಯೆಂದು ಊಹಿಸಬಹುದಾಗಿದೆ.

ಬಸದಿಯಲ್ಲಿ ಚಂದ್ರಪ್ರಭನಾಥನೆಂದು ಕರೆಯುವ ತೀರ್ಥಂಕರನ ಮತ್ತು ಯಕ್ಷ – ಯಕ್ಷಿಯರ ಬಿಂಬಗಳಿವೆ. ಸಿಂಹಪೀಠದ ಮೇಲೆ ಯೋಗಿಕ ಭಂಗಿಯಲ್ಲಿ ಆಸೀನನಾಗಿರುವ ಕರಿಶಿಲೆಯ ಜಿನಬಿಂಬವಿದೆ. ಇದನ್ನು ವಿದ್ವಾಂಸರು ಹಾಗೂ ಜನರು ಚಂದ್ರಪ್ರಭಾನಾಥನೆಂದು ಪಾರಂಪಾರಿಕವಾಗಿ ಗುರುತಿಸುತ್ತಾ ಬಂದಿದ್ದಾರೆ.

ಯಕ್ಷ – ಯಕ್ಷಿಯರನ್ನು ಅವಲೋಕಿಸಿದರೆ, ಈ ಬಿಂಬಗಳಲ್ಲಿ ಸುಮಾರು ಎಂಟನೇ ಶತಮಾನದ ಶಿಲ್ಪಲಕ್ಷಣಗಳು ಗೋಚರಿಸುತ್ತಿದ್ದು, ಇವು ಶ್ರವಣಬೆಳಗೊಳದ ಉಳಿದ ಬಸದಿಗಳಲ್ಲಿರುವ ಯಕ್ಷ–ಯಕ್ಷಿಯರ ಬಿಂಬಗಳಿಗಿಂತ ಆಕಾರದಲ್ಲಿ, ಭಂಗಿಯಲ್ಲಿ, ಆಭರಣ ಮತ್ತು ರೂಪ–ರೇಷೆಗಳಲ್ಲಿ ಬೇರೆ ರೀತಿಯಾಗಿರುವುದು ಕಂಡುಬರುತ್ತದೆ.

---

1 ಎ. ಕ., ಸಂಪುಟ ೨ (ಪರಿಷ್ಕೃತ ಆವೃತ್ತಿ). ಶ್ರವಣಬೆಳಗೊಳ ೧೫೧, ಪು. ೮೮

2 ಅದೇ, ಶ್ರವಣಬೆಳಗೊಳ ೧೪೦ (೪೧೫), ಪು. ೮೬

ಇಲ್ಲಿರುವ ಯಕ್ಷಿಯು 'ಸಿಂಹವಾಹಿನಿ'ಯಾಗಿದ್ದಾಳೆ. ಇವಳ ಕೈಗಳಲ್ಲಿ ಬೀಜಪೂರ ಮತ್ತು ನೀಲೋತ್ಪಲಗಳಿವೆ. ಈ ಲಕ್ಷಣಗಳು ದಿಗಂಬರಪಂಥದ ಸಿದ್ಧಾಯಿಕೆಗೆ ಅನ್ವಯಿಸುತ್ತದೆ.[3] ಆದರೆ ಈ ಬಿಂಬವನ್ನು 'ಅಂಬಿಕೆ' ಎಂದೂ,[4] 'ಜ್ವಾಲಮಾಲಿನಿ' ಎಂದೂ[5] ಕರೆದಿದ್ದಾರೆ. ಆದರೆ ಜೈನ ಶಿಲ್ಪಶಾಸ್ತ್ರಗಳ ಪ್ರಕಾರ 'ಆಮ್ರಸ್ತಬಕ'ವಿರದ ಇವಳು ಅಂಬಿಕೆಯೂ ಅಲ್ಲ, 'ಜ್ವಾಲೆ'ಯ ಲಾಂಛನವೂ ಇತರ ಯಾವ ಅಸ್ತ್ರಗಳೂ ಕಾಣಬರದ ಇವಳು ಯಕ್ಷಿ ಜ್ವಾಲಾಮಾಲಿನಿಯೂ ಅಲ್ಲ.[6] ಈ ಬಿಂಬವು ದಿಗಂಬರ ಪದ್ಧತಿಯ 'ಯಕ್ಷಿ ಸಿದ್ಧಾಯಿಕೆ'ಯ ಬಿಂಬವೇ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ಹೀಗೆಯೇ, ಇಲ್ಲಿಯ ಯಕ್ಷನ ಬಿಂಬವು ಇಲ್ಲಿ ಎರಡೇ ಕೈಗಳಿದ್ದು ಕೈಗಳಲ್ಲಿ ಅಭಯ ಹಸ್ತ ಮತ್ತು ಬೀಜಪೂರಗಳಿವೆ. ಈ ಬಿಂಬವು ದಿಗಂಬರ ಪದ್ಧತಿಯ ಮಾತಂಗ ಯಕ್ಷನ ಶಿಲ್ಪವಾಗಿದೆ.[7]

ಇಂತಹದೇ ಇನ್ನೊಂದು ಮಾತಂಗ ಯಕ್ಷನ ಪ್ರಾಚೀನ ಶಿಲ್ಪವನ್ನು ಚಂದ್ರಗುಪ್ತ ಬಸದಿಯ ಅಂತರಾಳದಲ್ಲಿ ಕಾಣುತ್ತೇವೆ. ಇಲ್ಲಿ 'ಮಾತಂಗ ಯಕ್ಷನು' ತನ್ನ ಲಾಂಛನದ ಆನೆಯ ತಲೆಯ ಮೇಲೆ ಸ್ಥಾನೀಕ ಭಂಗಿಯಲ್ಲಿದ್ದಾನೆ. ಈ ಬಿಂಬವನ್ನು ಡಾ|| ಎಂ.ಹೆಚ್. ಕೃಷ್ಣರವರು 'ಧರಣೇಂದ್ರಯಕ್ಷ'ನೆಂದು[8] ಗುರುತಿಸಿದರೆ, ಡಾ|| ಶಿರೂರುರವರು 'ಸರ್ವಾಹ್ಣ ಯಕ್ಷ'[9]ನದೆಂದು ಗುರುತಿಸಿದ್ದಾರೆ. ಡಾ|| ಷೆಟ್ಟರ್‌ರವರು ತಮ್ಮ 'ಶ್ರವಣಬೆಳಗೊಳ' ಪುಸ್ತಕದಲ್ಲಿ 'ಧರಣೇಂದ್ರ'ನೆಂದು ತಮ್ಮ ಒಂದು ಲೇಖನದಲ್ಲಿ 'ಸರ್ವಾಹ್ಣ'ನೆಂದು ಅಭಿಪ್ರಾಯಪಟ್ಟಿರುತ್ತಾರೆ[10]. ಹೀಗೆ ನಿರ್ದಿಷ್ಟವಾಗಿ ಗುರುತಿಸಲಾಗದ ಈ ಬಿಂಬವು ಚಂದ್ರಪ್ರಭ ಬಸದಿಯ ಯಕ್ಷನನ್ನೇ ಹೋಲುತ್ತಿದ್ದು, ಆನೆ ಲಾಂಛನವೂ ಇರುವ ಈ ಬಿಂಬವು ಕೂಡ ಮಾತಂಗಯಕ್ಷನದೇ ಆಗಿದೆ.[11]

ಸಿವಮಾರನು ಕಟ್ಟಿಸಿರುವ ಈ ಬಸದಿಯು

---

3 "ಸಿದ್ಧಾಯಿಕಾ ತಥಾ ದೇವಿ ದ್ವಿಭುಜ ಕನಕ ಪ್ರಭಾ ||" (ಪ್ರತಿಷ್ಠಾ ಸಾರಸಂಗ್ರಹ)
"The most Important symbol connected with Siddhayika is her 'Loin' &........The other Symbol is citrus, this is particularly indicative of her Yakshini's nature" — Jaina Iconography, B. Bhattcharya, p. 84

4 ಶ್ರವಣಬೆಳಗೊಳ, ಡಾ|| ಎಸ್. ಷೆಟ್ಟರ್, ಪು. ೨೩

5 ಶ್ರವಣಬೆಳಗೊಳ, ಡಾ|| ಶಿರೂರು, ಪು. ೩೪೪

6 i) "ದ್ವಿಭುಜಾ ಸಿಂಹಾರೂಢ ಆಮ್ರದೇವಿ ಹರಿತ್ಪ್ರಭ," (ಪ್ರತಿಷ್ಠಾ ಸಾರಸಂಗ್ರಹ)
"The Digambara image of this Yakshini is described as also riding a lion, but as bearing two hands with a bunch of Mangoes & a child" — Jaina Iconography, B. C. Bhattacharya, p. 104
ii) ಜ್ವಾಲಿನಿ ಮಹಿಷಾರೂಢ ದೇವಿಶ್ವೇತಾಬುಜಾಷ್ಟಕ
ಕಾಂಡಂ ವಜ್ರಂ ತ್ರಿಶೂಲಂಚಿ ಧತ್ತೇ ಪಾಶಾಂ ಚತುಷ್ಟಯೇ || (ಪ್ರತಿಷ್ಠಾ ಸಾರಸಂಗ್ರಹ)

7 ವರ್ಧಮಾನ ಜಿನೇಂದ್ರಸ್ಯಯಕ್ಷೋ ಮಾತಂಗ ಸಂಜ್ಞಕ...
....ವರದೋ ಗಜವಾಹಕ |
ಮಾತುಲಿಂಗಂ ಕರೆಧತ್ತೆ ಧರ್ಮಚಕ್ರಶ್ಚ ಮಸ್ತಕೆ || (ಪ್ರತಿಷ್ಠಾ ಸಾರಸಂಗ್ರಹ)

8 ಶ್ರವಣಬೆಳಗೊಳ, ಎಂ. ಹೆಚ್. ಕೃಷ್ಣ, ಪು. ೩೧

9 ಶ್ರವಣಬೆಳಗೊಳ, ಡಾ|| ಶಿರೂರು, ಪು. ೩೪೪

10 ಶ್ರವಣಬೆಳಗೊಳ, ಡಾ|| ಷೆಟ್ಟರ್, ಪು. ೧೭ ; The Classical Literature & the Jaina Iconography — 'Aspects of Jaina Art & Architecture', p. 28

11 ಇಂಥಹದೇ ಆನೆಯ ಲಾಂಛನವಿರುವ ಯಕ್ಷನ ಬಿಂಬವನ್ನು ಬಾದಾಮಿಯ ಮಹಾವೀರನ ಗುಹೆಯಲ್ಲಿ (ಮೂರನೇ ಬಸದಿ) ಕಾಣಬಹುದು.

ಮೂಲತಃ ಚಂದ್ರಪ್ರಭನಾಥದೆ ? ಇಲ್ಲಿರುವ ಜಿನಬಿಂಬವನ್ನು ಚಂದ್ರಪ್ರಭನಾಥನದೇ ಎನ್ನಲು ಆಧಾರಗಳೇ ಇಲ್ಲವಾಗಿದೆ. ಜಿನಬಿಂಬಗಳು ಒಂದೇ ರೀತಿಯಾಗಿರುವುದು ಹೀಗೆ ಗುರುತಿಸುವಲ್ಲಿ ತೊಡಕಾಗಿದೆ. ಅಲ್ಲದೇ, ಜೈನಧರ್ಮದಲ್ಲಿ ವೃಷಭನಾಥ, ನೇಮಿನಾಥ, ಪಾರ್ಶ್ವನಾಥ ಮತ್ತು ಮಹಾವೀರರು ಪ್ರಮುಖ ತೀರ್ಥಂಕರರಾಗಿದ್ದಾರೆ.[12] ಇವರಲ್ಲಿ ವೃಷಭನಾಥ, ನೇಮಿನಾಥ ಮತ್ತು ಪಾರ್ಶ್ವನಾಥರ ಬಸದಿಗಳಲ್ಲದೇ ಸುಪಾರ್ಶ್ವನಾಥ, ಅನಂತನಾಥ ಮತ್ತು ಚಂದ್ರಪ್ರಭನಾಥ ಮೊದಲಾದ ತೀರ್ಥಂಕರರ ಬಸದಿಗಳನ್ನು ಇಲ್ಲಿ ಕಾಣುತ್ತೇವೆ. ಆದರೆ ಇಂತಹ ಚಂದ್ರಗಿರಿಯಲ್ಲಿ ಪ್ರಮುಖ ತೀರ್ಥಂಕರನೆನಿಸಿದ ಮಹಾವೀರನ ಬಸದಿಯೇ ಇಲ್ಲದಿರುವುದು ಶಂಕೆಗೆ ಎಡೆಮಾಡಿದೆ. ಹೀಗಾಗಿ ಈ ಸಿವಮಾರನ ಬಸದಿಯಲ್ಲಿರುವ ಮಾತಂಗ ಯಕ್ಷ ಮತ್ತು ಸಿದ್ಧಾಯಿಕೆ ಯಕ್ಷಿಯರನ್ನು ಗಮನಿಸಿದಾಗ ಇಲ್ಲಿರುವ ಜಿನಬಿಂಬವು ಮಹಾವೀರನದಾಗಿರಬೇಕೆಂಬ ಸಂಶಯ ಬರುತ್ತದೆ.

ಇದೇ ನಿಟ್ಟಿನಲ್ಲಿ ಆಲೋಚಿಸಿದಾಗ, ಜೈನಶಿಲ್ಪ ಶಾಸ್ತ್ರವು, ವೃಷಭನಾಥ, ನೇಮಿನಾಥ ಮತ್ತು ಮಹಾವೀರರ ಬಿಂಬಗಳು ಮಾತ್ರ ಆಸೀನ ಭಂಗಿಯಲ್ಲಿದ್ದು ಉಳಿದ ತೀರ್ಥಂಕರರ ಬಿಂಬಗಳೆಲ್ಲ ಕಾಯೋತ್ಸರ್ಗ ಭಂಗಿಯಲ್ಲಿರುತ್ತವೆಂದು ತಿಳಿಸುತ್ತದೆ. ಇದನ್ನು ಗಮನಿಸಿದಾಗ, ಶಿವಮಾರನ ಬಸದಿಯು ಚಂದ್ರಪ್ರಭನಾಥನದೇ ಆಗಿದ್ದಿದ್ದರೇ, ಮೂಲಬಿಂಬವು ಕಾಯೋತ್ಸರ್ಗ ಬಿಂಬವಾಗಿರಬೇಕಾಗಿತ್ತು ಮತ್ತು ಯಕ್ಷ ಯಕ್ಷಿಯರು ಶ್ಯಾಮ, ಜ್ವಾಲಾಮಾನಿಯರ ಬಿಂಬಗಳಾಗಿರುತ್ತಿದ್ದರು. ಇಲ್ಲಿ ಹಾಗಿಲ್ಲದಿರುವುದರಿಂದ ಸಿವಮಾರನ ಬಸದಿಯಲ್ಲಿರುವ ಆಸೀನ ಬಿಂಬವು ಮಹಾವೀರನದೇ ಎಂಬ ಅಂಶವು ದೃಢಪಡುತ್ತದೆ.

ಇನ್ನು ಬಸದಿಯ ಸಮೀಪದಲ್ಲಿರುವ ಪೂರ್ವೋಕ್ತ ಸಿವಮಾರನ ಶಾಸನವು, ಲಿಪಿಯ ದೃಷ್ಟಿಯಿಂದ ಸುಮಾರು ಎಂಟನೇ ಶತಮಾನದಾಗಿದ್ದು, ಈ ಬಸದಿಯು ಶ್ರವಣಬೆಳಗೊಳದ ಪ್ರಾಚೀನ ಬಸದಿಗಳಲ್ಲಿ ಒಂದೆಂದು ಹೇಳಬಹುದಾಗಿದೆ. ಜೈನಧರ್ಮದ ಪೋಷಕನಾಗಿದ್ದ ಗಂಗರ ದೊರೆ ಎರಡನೇ ಸಿವಮಾರನು ಕಟ್ಟಿಸಿದ್ದ ಬಸದಿಯು ಇದೆಂದು, ಡಾ॥ ಎಂ. ಶೇಷಾದ್ರಿಯವರು ಮತ್ತಿತರ ವಿದ್ವಾಂಸರು ನಿಶ್ಚಯಿಸಿದ್ದಾರೆ.[13] ಇದರಿಂದ ಎಂಟನೇ ಶತಮಾನದಲ್ಲೇ ಕಟ್ಟಲ್ಪಟ್ಟಿದ್ದ ಈ ಬಸದಿಯು ಮೊದಲಿಗೆ ಮಹಾವೀರನಿಗೆ ಅರ್ಪಿತವಾಗಿತ್ತೆಂದು ಹೇಳಬೇಕಾಗುತ್ತದೆ.

ಈ ಬಗೆಯ ತೀರ್ಮಾನಕ್ಕೆ ಬರಲು ಇನ್ನೊಂದು ಪ್ರಬಲವಾದ ಆಧಾರವೆಂದರೆ, ಶ್ರವಣಬೆಳಗೊಳದ ಸಮೀಪದಲ್ಲೇ ಇರುವ ಕಂಬದಹಳ್ಳಿಯ ಬಸದಿಯನ್ನು ಅವಲೋಕಿಸಿದಾಗ, ಇಲ್ಲಿಯ ಮಧ್ಯದ ಗರ್ಭಗೃಹದಲ್ಲಿ ನೇಮಿನಾಥನ ಬಿಂಬವಿದ್ದರೂ, ನವರಂಗದಲ್ಲಿ ಯಕ್ಷ–ಯಕ್ಷಿ ಸಹಿತವಾದ ಜಿನಬಿಂಬವೊಂದು ಇಡಲ್ಪಟ್ಟಿರುವುದು ಕಂಡುಬರುತ್ತದೆ. ಈ ತೀರ್ಥಂಕರನ ಬಿಂಬವನ್ನು ವಿದ್ವಾಂಸರು ಮಹಾವೀರನ ಬಿಂಬವೆಂದು ಗುರುತಿಸಿದ್ದಾರೆ. ಈ ಮಹಾವೀರನ ಬಿಂಬದ ಬದಿಯಲ್ಲಿ ಕಂಡುಬರುತ್ತಿರುವ ಯಕ್ಷ–ಯಕ್ಷಿಯರು ಮಾತಂಗ, ಸಿದ್ಧಾಯಿಕೆಯರೇ ಆಗಿದ್ದಾರೆ. ಅಲ್ಲದೇ, ಈ ಬಿಂಬಗಳು ಚಂದ್ರಪ್ರಭಾನಾಥನ ಬಸದಿಯ ಯಕ್ಷ–ಯಕ್ಷಿಯರ ಬಿಂಬಗಳನ್ನು ಹೋಲುತ್ತಿವೆ. ಹೀಗೆ ಕಂಬದಹಳ್ಳಿಯ ಮಹಾವೀರನ ಬಿಂಬವನ್ನು ಸ್ಪಷ್ಟವಾಗಿ ಗುರುತಿಸುತ್ತಿರುವುದು ನಮಗೆ ಸಿವಮಾರನ ಬಸದಿಯ ಜಿನಬಿಂಬವು ಮಹಾವೀರ ತೀರ್ಥಂಕರನದು ಮತ್ತು ಮಾತಂಗಯಕ್ಷ, ಸಿದ್ಧಾಯಿಕೆ ಯಕ್ಷಿಯರದೇ ಬಿಂಬಗಳೆಂದು ನಿರ್ಧರಿಸುವಲ್ಲಿ ಸಹಾಯಕವಾಗುತ್ತದೆ.

ಇದಲ್ಲದೇ, ಶ್ರವಣಬೆಳಗೊಳದ ದೊಡ್ಡಬೆಟ್ಟದಲ್ಲೂ ಒಂದು ಚಂದ್ರನಾಥ ಬಸದಿ ಇದೆ. ಈ ಬಸದಿಯ ಹಿಂದಿನ ಗೋಡೆಯ ಬಂಡೆಯಲ್ಲೇ ಕಡೆದಿರುವ ಜಿನಬಿಂಬವು ಆಸೀನ ಭಂಗಿಯಲ್ಲಿದ್ದು, ಶಿಲ್ಪದ ಎರಡೂ ಬದಿಯಲ್ಲಿ ಬರೀ ಚಾಮರಗಳು ಬಿಡಿಸಲ್ಪಟ್ಟಿವೆ. ಯಕ್ಷ–ಯಕ್ಷಿಯರ ಬೇರೆ ಬೇರೆ ಬಿಂಬಗಳಿಲ್ಲ. ಇದರಿಂದ ತೀರ್ಥಂಕರರನ್ನು ಗುರುತಿಸುವುದು ಕಷ್ಟವಾದರೂ.

---

12 "ಶ್ರೀ ಆದಿನಾಥ ನೇಮಿಶ್ಚ ಪಾರ್ಶ್ವೋ ವೀರ ಚತುರ್ಥಕ" (ರೂಪಮಂಡನ-VI, ೨೬)

13 ಭಾರತ ಸಂಸ್ಕೃತಿ ದರ್ಶನ, ಡಾ॥ ಎಂ. ಶೇಷಾದ್ರಿ, ಪು. ೫೦೪

ಬಸದಿಯ ಬಳಿಯಲ್ಲೇ ಇರುವ ಶಾಸನವು ಇದು 'ಆದೀಶ್ವರನ ಬಸದಿ'[14] ಎಂದು ಸ್ಪಷ್ಟಪಡಿಸುತ್ತದೆ. ಶಾಸನವಲ್ಲದೇ, ಬಿಂಬದಲ್ಲಿ ಭುಜದವರೆಗೆ ಇರುವ ಮುಡಿಯು, ಇದು ಆದಿನಾಥನದೇ ಬಿಂಬವೆಂಬ ಸತ್ಯವನ್ನು ಬಿಂಬಿಸುತ್ತಿದೆ. ಆದರೆ ಸ್ಥಳೀಕರು ಈ ಆದಿನಾಥನ ಬಿಂಬದ ಕೆಳಗೆ ಚಂದ್ರಲಾಂಛನವನ್ನು ರೇಖೆಯಲ್ಲಿ ಮೂಡಿಸಿ ಬಸದಿಯನ್ನು ಚಂದ್ರನಾಥ ಬಸದಿ ಎಂದು ಪ್ರಚುರಪಡಿಸಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ.

ಈ ಹಿನ್ನೆಲೆಯಲ್ಲಿ ಹೇಳುವುದಾದರೆ, ಪ್ರಸ್ತುತ ಚಿಕ್ಕಬೆಟ್ಟದ ಮೇಲಿರುವ ಚಂದ್ರಪ್ರಭಾನಾಥ ಬಸದಿಯು ಮೊದಲಿಗೆ ಮಹಾವೀರನ ಬಸದಿಯಾಗಿದ್ದು, ಕಾಲಾಂತರದಲ್ಲಿ ಚಂದ್ರಪ್ರಭನಾಥ ಬಸದಿಯಾಗಿ ರೂಪಾಂತರ ಹೊಂದಿದೆಯೆಂಬುದರಲ್ಲಿ ಸಂಶಯವಿಲ್ಲ.

14 ಎ. ಕ., ಸಂ ೨, ಶಾಸನ ಸಂಖ್ಯೆ ೪೭೪, ಪು. ೨೬೨